ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೊಂದನೆಯ ಅಧಿವೇಶನ

ಶುಕ್ರವಾರ, ದಿನಾಂಕ: 25ನೇ ಸೆಪ್ಟಂಬರ್, 2020

ಗ್ರಾಮಠಾಣಾ ವ್ಯಾಪ್ತಿ ಮೀರಿ ಕಟ್ಟಡಗಳು ನಿರ್ಮಾಣವಾಗಿರುವ ಬಗ್ಗೆ

ಶ್ರೀ ಎಸ್. ರವಿ (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು) :-

690 (677) ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಜನಸಂಖ್ಯಾ ಹೆಚ್ಚಳದಿಂದಾಗಿ ಗ್ರಾಮೀಣ ಭಾಗದ ಘೋಷಿತ ಗ್ರಾಮಠಾಣಾ ಪ್ರದೇಶ ವ್ಯಾಪ್ತಿ ಮೀರಿ ಕಟ್ಟಡಗಳು ನಿರ್ಮಾಣವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಗ್ರಾಮಠಾಣಾ ವ್ಯಾಪ್ತಿಯ ಹೊರಗೆ ನಿರ್ಮಾಣ ಮಾಡಿಕೊಂಡಿರುವ ಕೃಷಿ ಭೂಮಿಯ ಅಘೋಷಿತ ಪಾರಂಪರಿಕ ವಿಸ್ತೃತ ಗ್ರಾಮಠಾಣಾ ಕಟ್ಟಡಗಳಿಗೆ ಯಾವುದೇ ಸಾರ್ವಜನಿಕ ಸೌಲಭ್ಯಗಳು ಸಿಗದೆ, ಗ್ರಾಮೀಣ ಜನತೆ ವಂಚಿತರಾಗುತ್ತಿರುವುದನ್ನು ಸರ್ಕಾರವು ಗಂಭೀರವಾಗಿ ಪರಿಗಣಿಸಿದೆಯೇ;

(ಇ) ಈಗಾಗಲೇ ನಿರ್ಮಾಣ ಮಾಡಿಕೊಂಡಿರುವ ಪಾರಂಪರಿಕ ಕೃಷಿಭೂಮಿಯಲ್ಲಿನ ಕಟ್ಟಡಗಳಿಗೆ ವಿಸ್ತøತ ಗ್ರಾಮಠಾಣಾ ಪ್ರದೇಶ ಎಂದು ಘೋಷಿಸುವ ಉದ್ದೇಶಕ್ಕಾಗಿ ಒಂದು ಬಾರಿ ವಿನಾಯಿತಿ ನೀಡಿ ಸಕ್ರಮಗೊಳಿಸುವ ವಿಧೇಯಕ ಮಂಡಿಸಲು ಸರ್ಕಾರಕ್ಕೆ ನಿರ್ಬಂಧಗಳಿವೆಯೇ; (ವಿವರ ನೀಡುವುದು)

(ಈ) ಸಾರ್ವತ್ರಿಕ, ಸಾಮಾಜಿಕ ನ್ಯಾಯ ದೃಷ್ಟಿಯಿಂದ ಕೃಷಿಭೂಮಿಯಲ್ಲಿ ನಿರ್ಮಾಣಗೊಂಡಿರುವ ಮನೆಗಳವರೆಗೂ ನಿಗದಿತ ಮಿತಿಯೊಳಗೆ ಕೃಷಿ ಭೂಮಿಯಲ್ಲಿನ ಅಘೋಷಿತ ಪಾರಂಪರಿಕ ವಿಸ್ತೃತ ಗ್ರಾಮಠಾಣಾ ಕಟ್ಟಡಗಳಿಗೆ ವಿಸ್ತೃತ ಗ್ರಾಮಠಾಣಾ ಪ್ರದೇಶ ಎಂದು ಶಾಸನ ರಚಿಸಿ ಗ್ರಾಮೀಣ ಜನತೆಗೆ ಅವಕಾಶ ಮಾಡಿಕೊಡಲು ಸರ್ಕಾರ ಬದ್ಧವಾಗಿದೆಯೇ?